ಶ್ರೀ ಮಹಾವಿಷ್ಣುವು ಕೂರ್ಮರೂಪದಿಂದ ಉಪದೇಶಿಸಿದ ಈ ಪುರಾಣವನ್ನು ಯಾರು ನಿಯಮದಿಂದ ಘಟಣಮಾಡುತ್ತಾರೋ ಅವರೆಲ್ಲ ಪಾಪಕಾರ್ಯಗಳಿಂದ ಮುಕ್ತರಾಗಿ ಬ್ರಹ್ಮಲೋಕದಲ್ಲಿ ಮಹತ್ವದ ಸ್ಥಾನವನ್ನು ಪಡೆಯುತ್ತಾರೆ.

ಈ ಪುರಾಣವನ್ನು ಬರೆದು ವೈಶಾಖ ಅಥವಾ ಕಾರ್ತೀಕಮಾಸದಲ್ಲಿ ವೇದ ಜ್ಞಾನಿಯಾದ ವಿಪ್ರನಿಗೆ ದಾನಕೊಟ್ಟರೆ ಅವನ ಎಲ್ಲ ಪಾಪಗಳೂ ನಾಶವಾಗುತ್ತವೆ. ಎಲ್ಲ ಐಶ್ವರ್ಯಗಳೂ ಅವನಿಗೆ ಲಭಿಸುತ್ತವೆ. ಮರ್ತ್ಯಲೋಕದ ವಿಪುಲಭೋಗಗಳನ್ನು ಅನುಭವಿಸಿ ಸ್ವರ್ಗಲೋಕಕ್ಕೆ ಹೋಗುತ್ತಾನೆ. ಅಲ್ಲಿಯೂ ಭೋಗಗಳನ್ನು ಅನುಭವಿಸಿ ಪುನ ಭೂಲೋಕದಲ್ಲಿ ವಿಪ್ರಕುಲದಲ್ಲಿ ಹುಟ್ಟುತ್ತಾನೆ. ಪೂರ್ವಸಂಸ್ಕಾರದ ಬಲದಿಂದ ಬ್ರಹ್ಮವಿದ್ಯೆಯನ್ನು ಪಡೆಯುತ್ತಾನೆ. ಕೊನೆಯ ಒಂದು ಅಧ್ಯಾಯನ್ನು ಓದಿದರೂ ಎಲ್ಲ ಪಾಪಗಳಿಂದ ಬಿಡುಗಡೆಯನ್ನು ಹೊಂದುತ್ತಾನೆ. ಅರ್ಥವನ್ನು ಚೆನ್ನಾಗಿ ತಿಳಿದುಕೊಂಡರೆ ಮುಕ್ತಿಯನ್ನು ಹೊಂದುತ್ತಾನೆ. ಎಲ್ಲ ಪರ್ವಕಾಲಗಳಲ್ಲಿ ದ್ವಿಜರು ಈ ಪುರಾಣವನ್ನು ಓದಬೇಕು, ಕೇಳಬೇಕು. ಇದರಿಂದ ಎಲ್ಲ ಪಾಪಗಳೂ ನಾಶವಾಗುತ್ತವೆ.

ಒಂದುಕಡೆ ಎಲ್ಲ ಪುರಾಣಗಳನ್ನೂ, ಇತಿಹಾಸವನ್ನೂ ಮತ್ತೊಂದು ಕಡೆ ಈ ಕೂರ್ಮಪುರಾಣವನ್ನು ಇಟ್ಟು ತೂಗಿದರೆ ಈ ಪುರಾಣವೇ ಇತರ ಪುರಾಣ ಇತಿಹಾಸ ಗಳನ್ನು ಮೀರಿಸಿದ ಕೃತಿ ಎಂದು ತಿಳಿಯುತ್ತದೆ. ಈ ಪುರಾಣಕ್ಕಿಂತ ಉತ್ತಮವಾದ ಸಾಧನಶಾಸ್ತ್ರ ಬೇರೊಂದು ಇಲ್ಲ. ಇಲ್ಲಿ ಭಗವಾನ್ ನಾರಾಯಣನ ಮಹಿಮೆಯು ಯಥಾರ್ಥವಾಗಿ ಹೇಳಲ್ಪಟ್ಟಿದೆ. ಈ ಪುರಾಣವು ಹೇಳುವಂತೆ ವಿಷ್ಣುಮಹಿಮೆಯನ್ನು ಬೇರೆ ಯಾವ ಪುರಾಣವೂ ಹೇಳುವುದಿಲ್ಲ. ಪರಬ್ರಹ್ಮನನ್ನು ಬೋಧಿಸುವ ಈ ಪುರಾಣವು ಎಲ್ಲ ಪಾಪಗಳನ್ನೂ ನಾಶಮಾಡುತ್ತದೆ.

ಇಲ್ಲಿ ವರ್ಣಿಸಲ್ಪಡುವ ಪರಬ್ರಹ್ಮವು ಎಲ್ಲ ತೀರ್ಥಗಳಿಗಿಂತ ಶ್ರೇಷ್ಠವಾದ ತೀರ್ಥ. ಎಲ್ಲ ತಪಸ್ಸುಗಳ ಪರಮಗುರಿ. ಈ ಪರಬ್ರಹ್ಮನ ಜ್ಞಾನವೇ ಶ್ರೇಷ್ಠವಾದಜ್ಞಾನ. ಈ ಪುರಾಣವನ್ನು ಅಯೋಗ್ಯನ ಸಮೀಪದಲ್ಲಿ ಓದಬಾರದು. ಓದಿದರೆ ಬಹುವಿಧ ನರಕಗಳನ್ನು ಹೊಂದುತ್ತಾನೆ. ದೇವತಾಕಾರ್ಯದ ಸಮಯದಲ್ಲಿ, ಶ್ರಾದ್ಧಕಾಲದಲ್ಲಿ ದ್ವಿಜರು ಈ ಪುರಾಣವನ್ನು ಕೇಳಬೇಕು. ಯಜ್ಞದ ಕೊನೆಯಲ್ಲಿ ಕೇಳಲೇಬೇಕು. ಶ್ರವಣದಿಂದ ಆಯಾಯಾ ಕಾರ್ಯಗಳಲ್ಲಿ ಸಂಭವಿಸಿದ ದೋಷಗಳ ಪರಿಹಾರ ವಾಗುತ್ತದೆ. ವೇದಾರ್ಥವನ್ನು ಸ್ಪಷ್ಟಪಡಿಸುವ ಈ ಪುರಾಣವನ್ನು ಮೋಕ್ಷವನ್ನು ಬಯಸುವವರೆಲ್ಲರೂ ವಿಶೇಷವಾಗಿ ಶ್ರವಣಮಾಡಿ, ಮನನ ಮಾಡಬೇಕು. ತಾನು ತಿಳಿದು ಬೇರೆ ಭಕ್ತನಾದ ವಿಪ್ರರಿಗೆ ತಿಳಿಸಬೇಕು. ಹೀಗೆ ಮಾಡಿದವನು ಎಲ್ಲ ಪಾಪಗಳಿಂದ ಬಿಡುಗಡೆಯನ್ನು ಪಡೆದು ಬ್ರಹ್ಮಸಾಯುಜ್ಯವನ್ನು ಹೊಂದುವನು.

ಶ್ರದ್ಧೆಯಿಲ್ಲದ, ಅಧಾರ್ಮಿಕ ಪುರುಷನಿಗೆ ಈ ಪುರಾಣವನ್ನು ಉಪದೇಶಿಸಬಾರದು. ಉಪದೇಶಿಸುವವನು ಮರಣಾನಂತರ ನರಕಕ್ಕೆ ಹೋಗುತ್ತಾನೆ ಮತ್ತು ನಾಯಿಯ ಜನ್ಮವನ್ನು

ಪಡೆಯುತ್ತಾನೆ. ಜಗಜ್ಜನ್ಮಾದಿಕಾರಣನಾದ, ಸನಾತನನಾದ ಶ್ರೀ ವಿಷ್ಣುವನ್ನು, ಕೃಷ್ಣದ್ವೈಪಾಯನರನ್ನು ನಮಸ್ಕರಿಸಿ ಈ ಪುರಾಣದ ಅಧ್ಯಯನವನ್ನು ಮಾಡಬೇಕು ಎಂದು ದೇವೋತ್ತಮನಾದ ಶ್ರೀ ವಿಷ್ಣುವಿನ, ಪರಾಶರರ ಮುನಿಗಳ ಮತ್ತು ವೇದವ್ಯಾಸರ ಆದೇಶವಿದೆ.

**ಕೂರ್ಮಪುರಾಣದ ಆಗತಿಕ್ರಮ:** ಹಿಂದೆ ನಾರದಮಹರ್ಷಿಗಳು ನಾರಾಯಣ ದೇವರಿಂದ ಈ ಪುರಾಣವನ್ನು ಕೇಳಿತಿಳಿದು ಗೌತಮಮುನಿಗಳಿಗೆ ಉಪದೇಶಿಸಿದರು. ಗೌತಮರಿಂದ ಪರಾಶರರು ಕೇಳಿದರು. ಪರಾಶರು, ಧರ್ಮ-ಅರ್ಥ-ಕಾಮ-ಮೋಕ್ಷಗಳಿಗೆ ಸಾಧನವಾದ ಈ ಪುರಾಣವನ್ನು ಗಂಗಾದ್ವಾರವೆಂಬ ಪ್ರದೇಶದಲ್ಲಿ ಮುನಿಗಳಿಗೆ ಉಪದೇಶಿಸಿದರು. ಹಿಂದೆ ಚತುರ್ಮುಖಬ್ರಹ್ಮದೇವರು ಧೀಮಂತರಾದ ಸನಕರಿಗೆ ಮತ್ತು ಸನತ್ಕುಮಾರರಿಗೆ ಈ ಪುರಾಣವನ್ನು ಉಪದೇಶಿಸಿದ್ದರು. ಸನಕರು ದೇವಲ ಎಂಬ ಮುನಿಗೆ ಉಪದೇಶಿಸಿದ್ದರು. ದೇವಲರು ಪಂಚಶಿಖ ಎಂಬ ಮುನಿಗೆ ಉಪದೇಶಿಸಿದ್ದರು.

ಸನತ್ಕುಮಾರರು ಸತ್ಯವತೀ ಸುತನಾದ ವ್ಯಾಸರಿಗೆ ಸರ್ವಾರ್ಥವನ್ನೊಳಗೊಂಡಿರುವ ಈ ಪುರಾಣವನ್ನು ಉಪದೇಶಿಸಿದ್ದರು. ದೇವೋತ್ತಮರಾದ ವ್ಯಾಸಮಹರ್ಷಿಗಳಿಂದ ನಾನು ಕೇಳಿದ್ದನ್ನು ನಿಮಗೆಲ್ಲರಿಗೂ ಉಪದೇಶಿಸಿದ್ದೇನೆ. ನೀವು ಧಾರ್ಮಿಕರಿಗೆ ಇದನ್ನು ಉಪದೇಶಿಸಬೇಕು. ಸರ್ವಜ್ಞರೂ, ಪರಾಶರ ಸುತರೂ, ಶಾಂತರೂ ನಾರಾಯಣಸ್ವರೂಪರೂ ಆದ ವೇದವ್ಯಾಸಮಹರ್ಷಿಗಳಿಗೆ ನಮಸ್ಕಾರ. ಜಗಜ್ಜನ್ಮಾದಿ ಕಾರಣನಾದ, ದೇವೋತ್ತಮ, ಕೂರ್ಮರೂಪಿಯಾದ ಶ್ರೀ ಮಹಾವಿಷ್ಣುವಿಗೆ ಧೀರ್ಘದಂಡ ನಮಸ್ಕಾರಗಳು.

*-ಗ್ರಂಥ ಸಮಾಪ್ತಿ-*

ಸರ್ವಂ ಶ್ರೀ ವಾಸುದೇವಾರ್ಪಣಮಸ್ತು

ಓಂ ಶಾಂತಿ ಶಾಂತಿ ಶಾಂತಿಃ